ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಗುರುವಾರ, ದಿನಾಂಕ: 18ನೇ ಜುಲೈ, 2019

IAS ಮತ್ತು IPS ಅಧಿಕಾರಿಗಳ ಮೇಲಿರುವ ಪ್ರಕರಣಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

331 (193) ಮಾನ್ಯ ಮುಖ್ಯಮಂತ್ರಿಯವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಐ.ಎ.ಎಸ್. ಮತ್ತು ಐ.ಪಿ.ಎಸ್., ಅಧಿಕಾರಿಗಳ ಮೇಲೆ ಅಕ್ರಮ ಆಸ್ತಿ ಹೊಂದಿದ ಮತ್ತು ಲಂಚ ಪಡೆದ ಆರೋಪಗಳಿವೆ;

(ವಿವರ ನೀಡುವುದು)

(ಆ) ರಾಜ್ಯದ ಎಷ್ಟು ಐ.ಎ.ಎಸ್., ಮತ್ತು ಐ.ಪಿ.ಎಸ್., ಅಧಿಕಾರಿಗಳ ಮೇಲೆ ಕ್ರಿಮಿನಲ್ ಪ್ರಕರಣಗಳು ದಾಖಲಾಗಿವೆ ; ಪ್ರಸ್ತುತ ಅವು ಯಾವ ಹಂತದಲ್ಲಿವೆ ;

(ಇ) ಕೇಂದ್ರ ಸರ್ಕಾರ ಇತ್ತೀಚೆಗೆ ಲಂಚ ಪಡೆದ ಹಾಗೂ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿದ ಆರೋಪ ಇರುವ ಐ.ಎ.ಎಸ್., ಮತ್ತು ಐ.ಪಿ.ಎಸ್., ಅಧಿಕಾರಿಗಳನ್ನು ಕಡ್ಡಾಯ ನಿವೃತ್ತಿಯ ಮೇಲೆ ಕಳುಹಿಸಿದಂತೆ ರಾಜ್ಯ ಸರ್ಕಾರವು ಲಂಚ ಪಡೆದ ಹಾಗೂ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿದ ಆರೋಪ ಇರುವ ಐ.ಎ.ಎಸ್., ಮತ್ತು ಐ.ಪಿ.ಎಸ್., ಅಧಿಕಾರಿಗಳನ್ನು ಕಡ್ಡಾಯ ನಿವೃತ್ತಿಯ ಮೇಲೆ ಕಳುಹಿಸುವ ಕುರಿತು ಸರ್ಕಾರದ ನಿಲುವೇನು ?